## ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಹೆಚ್. ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1103

ಉತ್ತರ ದಿನಾಂಕ : 13.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಮಂಜೂರು ಆಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು; ಕಾರ್ಯಾರಂಭ ಮಾಡಿರುವ ಘಟಕಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ 7620 ನೀರು ಶುದ್ಧೀಕರಣ ಘಟಕಗಳು ಮಂಜೂರಾಗಿರುತ್ತದೆ.<br>ರಾಜ್ಯದ ಗ್ರಾಮೀಣ ಜನವಸತಿಗಳಲ್ಲಿ ಈವರೆವಿಗೂ 17154 ನೀರು ಶುದ್ಧೀಕರಣ ಘಟಕಗಳನ್ನು ಕಾರ್ಯಾರಂಭಗೊಳಿಸಲಾಗಿದೆ. ಜಿಲ್ಲಾವಾರು ವಿವರಗಳನ್ನು **ಅನುಬಂಧದಲ್ಲಿ** ನೀಡಿದೆ. (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಂಚತಂತ್ರದ ದಿನಾಂಕ:06.03.2020ರ ದಾಖಲಾತಿ ಪ್ರಕಾರ) |
| ಆ. | ಈಗಾಗಲೇ ನಿರ್ಮಿಸಿರುವ ಶುದ್ಧ ಕುಡಿಯುವ ನೀರಿನ ಘಟಕಗಳಲ್ಲಿ ದುರಸ್ತಿಗೆ ಎಷ್ಟು ಘಟಕಗಳು ಬಂದಿರುತ್ತವೆ; (ವಿವರ ನೀಡುವುದು) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳ ಪೈಕಿ **12602** ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, **4552** ನೀರು ಶುದ್ಧೀಕರಣ ಘಟಕಗಳು ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುತ್ತಿರುವುದಿಲ್ಲ. ಜಿಲ್ಲಾವಾರು ವಿವರವನ್ನು **ಅನುಬಂಧದಲ್ಲಿ** ನೀಡಿದೆ. |
| ಇ. | ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಸ್ಥಾಪನೆ ಮಾಡಲು ಇರುವ ಮಾನದಂಡಗಳೇನು; | ರಾಜ್ಯದ ಗ್ರಾಮೀಣ ಜನವಸತಿಗಳಲ್ಲಿ ಹೊಸದಾಗಿ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ನೀರು ಕಲುಷಿತ ಹೊಂದಿರುವ ಜನವಸತಿಗಳಲ್ಲಿ ಮಾತ್ರ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ಕ್ರಮವಹಿಸಲಾಗುತ್ತಿದೆ. |
| ಈ. | ಶುದ್ಧ ಕುಡಿಯುವ ನೀರಿನ ಘಟಕಗಳ ನಿರ್ವಹಣೆಯನ್ನು ನಿರ್ವಹಿಸುವವರು ಯಾರು? | ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳನ್ನು ಅನುಮೋದನೆಯಾದ ಸಂಸ್ಥೆ / ಗುತ್ತಿಗೆದಾರರೇ 5 ವರ್ಷಗಳ ಅಧಿವರೆಗೆ ನಿರ್ವಹಣೆಮಾಡಬೇಕಾಗಿರುತ್ತದೆ.<br>ಸಹಕಾರ ಸಂಘ / ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳನ್ನು ಸಹಕಾರ ಸಂಸ್ಥೆರವರೇ ಅನುಷ್ಠಾನಗೊಳಿಸಿ, ನಿರ್ವಹಣೆ ಮಾಡಬೇಕಾಗಿರುತ್ತದೆ.<br>ಕೆ.ಆರ್.ಐ.ಡಿ.ಎಲ್.ಸಂಸ್ಥೆಗೆ ನೀಡಿದ ವಾರ್ಷಿಕ ನಿರ್ವಹಣೆಯು ಕೊನೆಗೊಂಡಿದ್ದು ಹಾಗೂ ಇತರೆ ಅನುದಾನದಲ್ಲಿ (MPLAD/ MLALAD/ GP/CSR/HKRDB/Others) ನಿರ್ಮಿಸಿರುವ ಘಟಕಗಳ ಪೈಕಿ, ನಿರ್ವಹಣೆಯ ಅವಧಿ ಮುಗಿದಿರುವ/ ನಿರ್ವಹಣೆ ಸಮಸ್ಯೆ ಇರುವ ಘಟಕಗಳಿಗೆ ನಿರ್ವಹಣೆಗಾಗಿ ಟೆಂಡರ್ ಕರೆದು, ಅನುಮೋದನೆಯಾದ ಸಂಸ್ಥೆಯೊಂದಿಗೆ ಕರಾರು ಮಾಡಿಕೊಂಡು, ಮುಂದಿನ 5 ವರ್ಷಗಳ ಅವಧಿವರೆಗೆ ನಿರ್ವಹಣೆಗಾಗಿ ಘಟಕಗಳನ್ನು ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ. |

ಸಂ:ಗ್ರಾಕುನೀ&ನೈಇ 86 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಅನುಬಂಧ-1

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 886 (1103)ರ ಲಗತ್ತು

## ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳ ವಸ್ತು-ಸ್ಥಿತಿ ವಿವರ:

| ಕ್ರ.ಸಂ. | ಜಿಲ್ಲೆ | ಅನುಷ್ಠಾನಗೊಳಿಸಿರುವ ಘಟಕಗಳ ಸಂಖ್ಯೆ | ಕಾರ್ಯನಿರ್ವಹಿಸುತ್ತಿರುವ ಘಟಕಗಳ ಸಂಖ್ಯೆ | ತಾತ್ಕಾಲಿಕವಾಗಿ ಕಾರ್ಯನಿರ್ವಹಿಸದೇ ಇರುವ ಘಟಕಗಳ ಸಂಖ್ಯೆ |
|---|---|---|---|---|
| 1 | ಬಾಗಲಕೋಟೆ | 810 | 581 | 229 |
| 2 | ಬಳ್ಳಾರಿ | 774 | 563 | 211 |
| 3 | ಬೆಳಗಾಂ | 1285 | 1007 | 278 |
| 4 | ಬೆಂಗಳೂರು(ನ) | 292 | 223 | 69 |
| 5 | ಬೆಂಗಳೂರು (ಗ್ರಾ) | 606 | 580 | 26 |
| 6 | ಬೀದರ್ | 381 | 167 | 214 |
| 7 | ಚಾಮರಾಜನಗರ | 204 | 110 | 94 |
| 8 | ಚಿಕ್ಕಬಳ್ಳಾಪುರ | 576 | 522 | 54 |
| 9 | ಚಿಕ್ಕಮಗಳೂರು | 215 | 157 | 58 |
| 10 | ಚಿತ್ರದುರ್ಗ | 1040 | 803 | 237 |
| 11 | ದಕ್ಷಿಣಕನ್ನಡ | 149 | 69 | 80 |
| 12 | ದಾವಣಗೆರೆ | 771 | 692 | 79 |
| 13 | ಧಾರವಾಡ | 453 | 266 | 187 |
| 14 | ಗದಗ | 487 | 346 | 141 |
| 15 | ಹಾಸನ | 417 | 320 | 97 |
| 16 | ಹಾವೇರಿ | 772 | 574 | 198 |
| 17 | ಕಲಬುರಗಿ | 445 | 148 | 297 |
| 18 | ಕೊಡಗು | 36 | 23 | 13 |
| 19 | ಕೋಲಾರ | 1090 | 924 | 166 |
| 20 | ಕೊಪ್ಪಳ | 612 | 344 | 268 |
| 21 | ಮಂಡ್ಯ | 751 | 488 | 263 |
| 22 | ಮೈಸೂರು | 625 | 366 | 259 |
| 23 | ರಾಯಚೂರು | 582 | 416 | 166 |
| 24 | ರಾಮನಗರ | 532 | 448 | 84 |
| 25 | ಶಿವಮೊಗ್ಗ | 321 | 197 | 124 |
| 26 | ತುಮಕೂರು | 1432 | 1154 | 278 |
| 27 | ಉಡುಪಿ | 59 | 53 | 6 |
| 28 | ಉತ್ತರ ಕನ್ನಡ | 243 | 164 | 79 |
| 29 | ವಿಜಯಪುರ | 853 | 703 | 150 |
| 30 | ಯಾದಗಿರಿ | 341 | 194 | 147 |
| ಒಟ್ಟು : | | **17154** | **12602** | **4552** |

**ಟಿಪ್ಪಣಿ:** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಂಚತಂತ್ರದ ದಿನಾಂಕ:06.03.2020ರ ದಾಖಲಾತಿ ಪ್ರಕಾರ